# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1315 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 24.12.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಅಧೀನದ ಹಾಸ್ಟೆಲ್‌ಗಳಿಗೆ ಆಹಾರ ಸಾಮಗ್ರಿ ಪೂರೈಸುವ ಟೆಂಡರ್ ಪ್ರಕ್ರಿಯೆಯಲ್ಲಿ ಅವ್ಯವಹಾರ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ | ಹಾಗಿದ್ದಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಅಧೀನದ ಹಾಸ್ಟೆಲ್ ಗಳಿಗೆ ಆಹಾರ ಸಾಮಗ್ರಿ ಪೂರೈಸುವ ಟೆಂಡರ್‌ನಲ್ಲಿನ ಅವ್ಯವಹಾರ ತಡೆಯುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ತುಮಕೂರು ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳಿಗೆ ಆಹಾರ ಸರಬರಾಜು ಟೆಂಡರ್ ನಲ್ಲಿ ಅವ್ಯವಹಾರವಾಗಿರುವ ಕುರಿತಂತೆ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ, ತುಮಕೂರು ಜಿಲ್ಲೆ ಇವರನ್ನು ಹಾಗೂ ಕಚೇರಿ ವ್ಯವಸ್ಥಾಪಕರನ್ನು ಶಿಸ್ತು ಕ್ರಮ ಬಾಕಿ ಇರಿಸಿ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.<br><br>ಆಹಾರ ಸಾಮಗ್ರಿಗಳ ಬೇಡಿಕೆ ಸರಬರಾಜು ಹಾಗೂ ಬಳಕೆಯಲ್ಲಿ ಅವ್ಯವಹಾರಗಳನ್ನು ತಡೆಯಲು ಇತ್ತೀಚೆಗೆ ಸರ್ಕಾರದ ಆದೇಶ ಸಂಖ್ಯೆ: ಹಿಂವಕ 578 ಬಿಎಂಎಸ್ 2021 ದಿ: 30.11.2021ನ್ನು ಹೊರಡಿಸಲಾಗಿದ್ದು, ಈ ಕೆಳಕಂಡ ಮಾಹಿತಿಯನ್ನು ವಿದ್ಯಾರ್ಥಿನಿಲಯಗಳು/ಆಶ್ರಮ ಶಾಲೆಗಳಲ್ಲಿ ಪ್ರಚುರ ಪಡಿಸಲು ಕ್ರಮ ವಹಿಸಲಾಗಿದೆ.<br><br>• ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯದಲ್ಲಿ ವಿದ್ಯಾರ್ಥಿನಿಲಯದ ನಿರ್ವಹಣೆ ಗಾಗಿ/ಆಶ್ರಮ ಶಾಲೆಗಳ ನಿರ್ವಹಣೆಗಾಗಿ ಮಂಜೂರಾಗಿರುವ ಹುದ್ದೆಗಳು ಹಾಗೂ ಭರ್ತಿಯಾಗಿರುವ ಹುದ್ದೆಗಳ ವಿವರಗಳನ್ನು ಸೂಚನಾ ಫಲಕದ ಮೇಲೆ ಅಥವಾ ವಿದ್ಯಾರ್ಥಿನಿಲಯದ ದ್ವಾರದ ಕೊಠಡಿಯ ಒಳಗಿನ ಗೋಡೆಯ ಮೇಲೆ ಹಾಕುವುದು.<br>• ವಿದ್ಯಾರ್ಥಿನಿಲಯದ ನಿಲಯಪಾಲಕರ/ವಾರ್ಡನ್/ ನಿಲಯ ಮೇಲ್ವಿಚಾರಕರ ವಿವರಗಳು, ಸಂಪರ್ಕ ವಿವರ ಹಾಗೂ ಸದರಿ ಅಧಿಕಾರಿಯು ವಿದ್ಯಾರ್ಥಿನಿಲಯದಲ್ಲಿ ಹಾಜರಿದ್ದು ಕಾರ್ಯನಿರ್ವಹಿಸುವ ಸಮಯ<br>• ವಿದ್ಯಾರ್ಥಿನಿಲಯದಲ್ಲಿ ಹಾಲಿ ಇರುವ ವಿದ್ಯಾರ್ಥಿಗಳ ಸಂಖ್ಯೆ<br>• ವಿದ್ಯಾರ್ಥಿನಿಲಯವು ಬಾಡಿಗೆ ಕಟ್ಟಡದಲ್ಲಿ ನಡೆದಿದ್ದಲ್ಲಿ ಮಾಹೆಯಾನ ಬಾಡಿಗೆ ವಿವರಗಳು. |

| | | |
|---|---|---|
| | | • ಪಡಿತರ ದರಗಳಲ್ಲಿ ಪಡೆಯಲಾಗುವ ಅಕ್ಕಿ ಮತ್ತು ಗೋದಿಯ ಸರಬರಾಜಿಗೆ ನಿಲಯಪಾಲಕರು/ವಾರ್ಡನ್ /ನಿಲಯ ಮೇಲ್ವಿಚಾರಕರು ನೀಡಿದ ಬೇಡಿಕೆ ಪಟ್ಟಿ (Indent), ಭಾರತೀಯ ಆಹಾರ ನಿಗಮದ ಗೋದಾಮುಗಳಿಂದ ಆಹಾರ ಸಾಮಗ್ರಿಗಳ ಗುತ್ತಿಗೆದಾರ ಎತ್ತುವಳಿ ಮಾಡಿದ ಪ್ರಮಾಣ ಹಾಗೂ ವಿದ್ಯಾರ್ಥಿನಿಲಯದ ಬಾಗಿಲಿಗೆ ಸರಬರಾಜು ಮಾಡಿದ ಅಕ್ಕಿ, ಗೋದಿ ಪ್ರಮಾಣ ಹಾಗೂ ದಿನಾಂಕ, ಸಮಯ, ವಾಹನ ಸಂಖ್ಯೆ, ಡೆಲಿವರಿ ನೋಟ್ ಹಾಗೂ ಸಂಬಂಧಪಟ್ಟ ವಹಿಯಲ್ಲಿ (Stock Register) ದಾಖಲಿಸಿದ ಪ್ರತಿ.<br>• ಉಳಿದ ಎಲ್ಲಾ ಆಹಾರ ಸಾಮಗ್ರಿಗಳಿಗೆ ನಿಲಯಪಾಲಕರು/ವಾರ್ಡನ್/ನಿಲಯ ಮೇಲ್ವಿಚಾರಕರು ಪ್ರತಿ ತಿಂಗಳು ಆಹಾರ ಸಾಮಗ್ರಿಗಳ ಸರಬರಾಜು ಮಾಡುವ ಗುತ್ತಿಗೆದಾರರಿಗೆ ನೀಡುತ್ತಿರುವ ಬೇಡಿಕೆ ಪಟ್ಟಿ (Indent) ಪ್ರತಿ ಹಾಗೂ ಆಹಾರ ಸಾಮಗ್ರಿಗಳ ಸರಬರಾಜು ಮಾಡುವ ಗುತ್ತಿಗೆದಾರ ವಿದ್ಯಾರ್ಥಿ ನಿಲಯದ ಬಾಗಿಲಿಗೆ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡಿದ ದಿನಾಂಕ, ಸಮಯ, ವಾಹನ ಸಂಖ್ಯೆ, ಡೆಲಿವರಿ ನೋಟ್ ಹಾಗೂ ಸಂಬಂಧಪಟ್ಟ ವಹಿಯಲ್ಲಿ (Stock Register) ಸಾಮಗ್ರಿಗಳನ್ನು ದಾಖಲಿಸಿದ ಪ್ರತಿ.<br>• ವಿದ್ಯಾರ್ಥಿನಿಲಯದಲ್ಲಿ ಪ್ರತಿ ದಿನ ವಿದ್ಯಾರ್ಥಿಗಳಿಗೆ ನೀಡಲು ಹಾಲು ಸರಬರಾಜಿಗೆ ನೀಡಿದ ಬೇಡಿಕೆ ಪಟ್ಟಿಯ ಪ್ರತಿ (Indent).<br>• ವಾರಕ್ಕೆ ತರಕಾರಿ, ಹಣ್ಣು, ಮೊಟ್ಟೆ, ಕೋಳಿ, ಮಾಂಸ ಸರಬರಾಜು ಮಾಡಲು ಬೇಡಿಕೆ ಪ್ರತಿ (Indent) ಆಹಾರ ಸಾಮಗ್ರಿಗಳ ಸರಬರಾಜು ಮಾಡುವ ಗುತ್ತಿಗೆದಾರ ವಿದ್ಯಾರ್ಥಿನಿಲಯದ ಬಾಗಿಲಿಗೆ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡಿದ ದಿನಾಂಕ, ಸಮಯ, ವಾಹನ ನೊಂದಣಿ ಸಂಖ್ಯೆ, ಡೆಲಿವರಿ ನೋಟ್ ಹಾಗೂ ಸಂಬಂಧಪಟ್ಟ ವಹಿಯಲ್ಲಿ (Stock Register) ಸಾಮಗ್ರಿಗಳನ್ನು ದಾಖಲಿಸಿದ ಪ್ರತಿ.<br>• ಪ್ರತಿ ಮಾಹೆ ವಿದ್ಯಾರ್ಥಿನಿಲಯದಲ್ಲಿ ನಿರ್ವಹಣೆಗಾಗಿ ಭರಿಸುತ್ತಿರುವ ಇತರೆ ವೆಚ್ಚಗಳ ವಿವರ.<br>• ಯಶಸ್ವಿ ಗುತ್ತಿಗೆದಾರರ ಜೊತೆ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಮಾಡಿಕೊಂಡಿರುವ ಒಪ್ಪಂದದ ಪ್ರತಿ.<br>• ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡಲು ಬೇಡಿಕೆ ಪಟ್ಟಿ ನೀಡುವಾಗ ವಿದ್ಯಾರ್ಥಿ ನಿಲಯದಲ್ಲಿ ನಿಯಮಾನುಸಾರ ವಾಸಿಸುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಯ ಆಧಾರದ ಮೇಲೆ ನೀಡುವುದು.<br>• ಸರ್ಕಾರದ ಆದೇಶ ಸಂಖ್ಯೆ: ಹಿಂವಕ 586 ಬಿಎಂಎಸ್ 2018, ದಿ: 07.04.2018ರಲ್ಲಿ ತಿಳಿಸಿರುವಂತೆ, ಪ್ರತಿ ವಿದ್ಯಾರ್ಥಿನಿಲಯಕ್ಕೆ/ಆಶ್ರಮ ಶಾಲೆಗೆ ಅಗತ್ಯವಿರುವ ಪದಾರ್ಥಗಳನ್ನು ಗುತ್ತಿಗೆದಾರರು ವಿದ್ಯಾರ್ಥಿನಿಲಯಗಳ /ಶಾಲೆಗಳ ಬಾಗಿಲಿಗೆ ಸರಬರಾಜು ಮಾಡುವುದು, |

| | | |
|---|---|---|
| | | ವಿದ್ಯಾರ್ಥಿನಿಲಯದ/ವಸತಿ ಶಾಲೆಯ ಬಾಗಿಲಲ್ಲಿ ತೂಕ ಮಾಡಿ ತಲುಪಿಸುತ್ತಿರುವ ಭಾವಚಿತ್ರಗಳನ್ನು ಡಿಜಿಟಲ್ ಫರ್ಮ್ ನಲ್ಲಿ ದಾಖಲೀಕರಣ ಮಾಡಿಕೊಳ್ಳುವುದು ಹಾಗೂ ಸದರಿ ದಾಖಲಾತಿಗಳನ್ನು ನಿಯಮಾನುಸಾರ ಪರಿಶೀಲಿಸಿ ಉಳಿದ ದಾಖಲಾತಿಗಳ ಜೊತೆಯಲ್ಲಿ ನಿಯಮಾನುಸಾರ ಪರಿಶೀಲಿಸಿ ಅರ್ಹತೆಯನುಸಾರ ಗುತ್ತಿಗೆದಾರರಿಗೆ ಮೊತ್ತವನ್ನು ಪಾವತಿಸುವುದು.<br>• ಯಾವುದೇ ಕಾರಣಕ್ಕೂ ನಿಲಯಪಾಲಕರ/ವಾರ್ಡನ್/ ನಿಲಯ ಮೇಲ್ವಿಚಾರಕರ ಮೇಲೆ ಆಹಾರ ಸಾಮಗ್ರಿಗಳ ಸರಬರಾಜಿನ ಹೊಣೆಗಾರಿಕೆಯನ್ನು ವಹಿಸಬಾರದು.<br>• ಆಹಾರ ಸಾಮಗ್ರಿಗಳ ಸರಬರಾಜು ಅಥವಾ ಗುಣಮಟ್ಟದಲ್ಲಿ ಲೋಪದೋಷಗಳು ಕಂಡುಬಂದಲ್ಲಿ ಆಹಾರ ಸಾಮಗ್ರಿಗಳ ಸರಬರಾಜು ಗುತ್ತಿಗೆದಾರರಿಗೆ ವಿಧಿಸಿರುವ ದಂಡದ ವಿವರಗಳು ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಕಚೇರಿಯಲ್ಲಿ ಕಡ್ಡಾಯವಾಗಿ ನಿರ್ವಹಿಸತಕ್ಕದ್ದು.<br>• ಕನಿಷ್ಠ 2 ತಿಂಗಳಿಗೊಮ್ಮೆ ನಿಲಯಪಾಲಕರ/ವಾರ್ಡನ್/ ನಿಲಯ ಮೇಲ್ವಿಚಾರಕರ ತಾಲ್ಲೂಕು ಕಲ್ಯಾಣಾಧಿಕಾರಿ ಹಾಗೂ ಆಹಾರ ಸಾಮಗ್ರಿ ಸರಬರಾಜು ಮಾಡುವ ಗುತ್ತಿಗೆದಾರರನ್ನೊಳಗೊಂಡ ಸಭೆಯನ್ನು ಜಿಲ್ಲಾ ಅಧಿಕಾರಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಏರ್ಪಡಿಸುವುದು.<br>• ಮೇಲಿನ ಎಲ್ಲಾ ಅಂಶಗಳು ಪಾಲನೆಯಾಗುತ್ತಿರುವ ಬಗ್ಗೆ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಅನುಪಾಲನಾ ವರದಿಯನ್ನು ಸಲ್ಲಿಸುವುದು.<br><br>ಪ್ರತಿ ದಿನ ಇಲಾಖೆಯಲ್ಲಿರುವ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ಮತ್ತು ಆಶ್ರಮ ಶಾಲೆಗಳಲ್ಲಿ ಸಿಬ್ಬಂದಿ ಹಾಜರಾತಿ ವಿವರಗಳು ಮತ್ತು ಆ ದಿನದ ಮೆನು ಹಾಗೂ ಅದರ ಪ್ರಕಾರ ಉಗ್ರಾಣದಿಂದ ಸೆಳೆಯಲಾದ ಆಹಾರ ಪದಾರ್ಥಗಳು ಹಾಗೂ ಅದರ ಪ್ರಮಾಣ ಮತ್ತು ಸದರಿ ಆಶ್ರಮ ಶಾಲೆಗಳು ಹಾಗೂ ವಿದ್ಯಾರ್ಥಿನಿಲಯಗಳಲ್ಲಿ ವಿದ್ಯಾರ್ಥಿಗಳ ಹಾಜರಾತಿ ವಿವರಗಳನ್ನು ಸಾರ್ವಜನಿಕ ವಲಯದಲ್ಲಿ ಪ್ರಚುರಪಡಿಸಲು ಕ್ರಮ ತೆಗೆದುಕೊಳ್ಳಲಾಗಿವೆ. ಅದೇ ರೀತಿ ಜಿಲ್ಲಾವಾರು, ತಾಲ್ಲೂಕುವಾರು, ಆಶ್ರಮ ಶಾಲೆವಾರು/ವಿದ್ಯಾರ್ಥಿನಿಲಯವಾರು ಮಂಜೂರಾತಿ ಮತ್ತು ದಾಖಲಾತಿ ಮತ್ತು ಹಾಲಿ ಇರುವ ವಿವರಗಳನ್ನು ಸಹ ಸಾರ್ವಜನಿಕ ವಲಯದಲ್ಲಿ ಪ್ರಚುರುಪಡಿಸಲು ಕ್ರಮ ತೆಗೆದುಕೊಳ್ಳಲಾಗಿದೆ. |

<table>
<tr>
<td>ಇ</td>
<td>ರಾಜ್ಯದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಅಧೀನದಲ್ಲಿ ಒಟ್ಟು ಎಷ್ಟು ಹಾಸ್ಟೆಲ್‌ಗಳು ಬರುತ್ತದೆ;<br>(ಹಾಸ್ಟೆಲ್ ಹೆಸರು ಸಹಿತ ವಿವರ ಒದಗಿಸುವುದು)</td>
<td>ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ 1301 ಮೆಟ್ರಿಕ್-ಪೂರ್ವ ಹಾಗೂ 1137 ಮೆಟ್ರಿಕ್-ನಂತರದ ಹೀಗೆ ಒಟ್ಟು 2438 ವಿದ್ಯಾರ್ಥಿನಿಲಯಗಳು ಇದ್ದು, ವಿದ್ಯಾರ್ಥಿನಿಲಯವಾರು ಮಾಹಿತಿಯನ್ನು ಇಲಾಖೆಯ ಜಾಲತಾಣ http//www.bcwd.karnataka.gov.in ನಲ್ಲಿ ನೀಡಲಾಗಿದೆ.</td>
</tr>
<tr>
<td>ಈ</td>
<td>2021-22ನೇ ಸಾಲಿಗೆ ಸದರಿ ಇಲಾಖೆಯಡಿ ಬರುವ ಹಾಸ್ಟೆಲ್‌ಗಳ ನಿರ್ವಹಣೆಗೆ ಮತ್ತು ಆಹಾರ ಸಾಮಗ್ರಿ ಪೂರೈಕೆ ಸೇರಿದಂತೆ ಎಷ್ಟು ಅನುದಾನ ಒದಗಿಸಲಾಗಿತ್ತು; ಎಷ್ಟು ಅನುದಾನ ಬಳಕೆಯಾಗಿದೆ; ಬಾಕಿ ಇರುವ ಅನುದಾನ ಎಷ್ಟು;</td>
<td>2021-22ನೇ ಸಾಲಿಗೆ ವಿದ್ಯಾರ್ಥಿನಿಲಯಗಳ ನಿರ್ವಹಣೆಗೆ (ಆಹಾರ ಸಾಮಗ್ರಿ ಪೂರೈಕೆ ಸೇರಿದಂತೆ) ಒದಗಿಸಲಾಗಿರುವ, ಖರ್ಚಾಗಿರುವ ಹಾಗೂ ಬಾಕಿ ಇರುವ ಅನುದಾನದ ವಿವರ ಕೆಳಕಂಡಂತಿದೆ.<br>(ರೂ.ಕೋಟಿಗಳಲ್ಲಿ)
<table>
<tr><th rowspan="2">ಲೆಕ್ಕಶೀರ್ಷಿಕೆ ವಿವರ</th><th colspan="4">2021-22ನೇ ಸಾಲಿನ ಅನುದಾನದ ವಿವರ (ವೇತನೇತರ)</th></tr>
<tr><th>ಒದಗಿಸಿರುವ ಅನುದಾನ</th><th>ಬಿಡುಗಡೆಯಾದ ಅನುದಾನ (ಅಕ್ಟೋಬರ್ ಅಂತ್ಯಕ್ಕೆ)</th><th>ಖರ್ಚಾದ ಅನುದಾನ (ಅಕ್ಟೋಬರ್ ಅಂತ್ಯಕ್ಕೆ)</th><th>ಬಾಕಿ ಇರುವ ಅನುದಾನ</th></tr>
<tr><td>2225-03-277-2-53</td><td>33.99</td><td>9.05</td><td>5.00</td><td>4.05</td></tr>
<tr><td>2225-00-103-0-26</td><td>443.15</td><td>332.36</td><td>112.80</td><td>219.56</td></tr>
</table>
</td>
</tr>
<tr>
<td>ಉ</td>
<td>ಪ್ರಸಕ್ತ ಆರ್ಥಿಕ ವರ್ಷ ಯಾವ ಯಾವ ಗುತ್ತಿಗೆದಾರರು ಎಷ್ಟು ಹಾಸ್ಟೆಲ್‌ಗಳಿಗೆ ಆಹಾರ ಸಾಮಗ್ರಿ ಪೂರೈಸುತ್ತಿದ್ದಾರೆ; ಅವು ಯಾವುವು; ಅವರು ಪಡೆದ ಟೆಂಡರ್ ಮೊತ್ತ ಎಷ್ಟು? (ಸಂಪೂರ್ಣ ವಿವರ ಒದಗಿಸುವುದು)</td>
<td>2021-22ನೇ ಸಾಲಿಗೆ ಇಲಾಖಾ ವಿದ್ಯಾರ್ಥಿನಿಲಯಗಳಿಗೆ ಆಹಾರ ಸಾಮಗ್ರಿ ಪೂರೈಸುತ್ತಿರುವ, ಆಹಾರ ಸಾಮಗ್ರಿಗಳ ವಿವರ ಮತ್ತು ಅವರು ಪಡೆದ ಟೆಂಡರ್ ಮೊತ್ತದ ವಿವರಗಳನ್ನು ಇಲಾಖೆಯ ಜಾಲತಾಣ http//www.bcwd.karnataka.gov.in ನಲ್ಲಿ ನೀಡಲಾಗಿದೆ.</td>
</tr>
</table>

**ಸಂಖ್ಯೆ: ಹಿಂವಕ 786 ಬಿಎಂಎಸ್ 2021**

(ಕೋಟಾ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು